# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 202 |
| ಮಾನ್ಯ ಸದಸ್ಯರ ಹೆಸರು: | ಶ್ರೀ ಎನ್ ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ: | 13.09.2021 |
| ಉತ್ತರಿಸುವ ಸಚಿವರು: | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಈವರೆವಿಗೂ ಕೋವಿಡ್-19 ನಿಂದ ಮೃತಪಟ್ಟವರ ಸಂಖ್ಯೆ ಎಷ್ಟು: (ಜಿಲ್ಲಾವಾರು ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ದಿನಾಂಕ:12-09-2021ರ ಅಂತ್ಯಕ್ಕೆ ಕೋವಿಡ್-19 ನಿಂದ ಮೃತಪಟ್ಟವರ ಸಂಖ್ಯೆ **37,504. (ಜಿಲ್ಲಾವಾರು ವಿವರವನ್ನು ಅನುಬಂಧ-1 ರಲ್ಲಿರಿಸಿದೆ)** |
| ಆ | ಕೋವಿಡ್-19 ನಿಂದ ಮೃತ ಪಟ್ಟವರಿಗೆ ಸರ್ಕಾರ ಪರಿಹಾರ ಧನ ನೀಡಲಾಗುತ್ತಿದೆಯೇ; ಹಾಗಿದ್ದಲ್ಲಿ ಈ ಸಂಬಂಧ ಸರ್ಕಾರದ ಮಾರ್ಗ ಸೂಚಿಗಳಾವುವು: (ಸಂಪೂರ್ಣ ವಿವರ ನೀಡುವುದು) | ಕೋವಿಡ್-19 ನಿಂದ ಮೃತ ಪಟ್ಟವರಿಗೆ ಪರಿಹಾರ ಧನವನ್ನು ಕಂದಾಯ ಇಲಾಖೆಯಿಂದ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ:ಕಂಇ 294 ಟಿಎನ್ ಆರ್ 2021, ದಿ:08-07-2021ರ ಅನ್ವಯ ಕೋವಿಡ್-19 ನಿಂದ ಮೃತಪಟ್ಟಿರುವ ಬಿಪಿಎಲ್ ಕುಟುಂಬದ ದುಡಿಯುವ ವ್ಯಕ್ತಿಗೆ ರೂ.1.00 ಲಕ್ಷ ಪರಿಹಾರ ನೀಡಲಾಗುವುದು. ಈ ಕುರಿತು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ನಿರ್ವಹಿಸಬೇಕಾದ ಕಾರ್ಯದ ಬಗ್ಗೆ ಅಗತ್ಯ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ ಹಾಗೂ ಅರ್ಜಿ ಸ್ವೀಕೃತಿ ಹಾಗೂ ಸಂಸ್ಕರಣೆಗೆ ಸಂಬಂಧಿಸಿದಂತೆ ತಂತ್ರಾಂಶವನ್ನು ಅಭಿವೃದ್ಧಿಪಡಿಸಲಾಗಿದ್ದು, ಪರಿಶೀಲನಾ ಕಾರ್ಯ ಪ್ರಗತಿಯಲ್ಲಿದೆ. |
| ಇ | ಮಂಡ್ಯ ಜಿಲ್ಲೆಯಲ್ಲಿ ಈವರೆವಿಗೂ ಕೋವಿಡ್-19 ರಿಂದ ಮೃತ ಪಟ್ಟವರ ಸಂಖ್ಯೆ ಎಷ್ಟು: (ತಾಲ್ಲೂಕುವಾರು ಮೃತಪಟ್ಟವರ ಸಂಪೂರ್ಣ ವಿವರ ನೀಡುವುದು) | ಮಂಡ್ಯ ಜಿಲ್ಲೆಯಲ್ಲಿ ಕೋವಿಡ್-19 ನಿಂದ ದಿನಾಂಕ: 05-09-2021 ರವರೆಗೆ **646** ಜನರು ಮೃತಪಟ್ಟಿರುತ್ತಾರೆ. **(ತಾಲ್ಲೂಕುವಾರು ವಿವರವನ್ನು ಅನುಬಂಧ-2 ರಲ್ಲಿರಿಸಿದೆ).** |
| ಈ | ಮಂಡ್ಯ ಜಿಲ್ಲೆಯಲ್ಲಿ ಈವರೆವಿಗೂ ಕೋವಿಡ್-19 ರಿಂದ ಮೃತ ಪಟ್ಟವರಲ್ಲಿ ಎಷ್ಟು ಮಂದಿಗೆ ಸರ್ಕಾರದಿಂದ ಸಹಾಯಧನ ನೀಡಲಾಗಿದೆ: (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | • ಕೋವಿಡ್ ನಿಂದ ಮೃತ ಹೊಂದಿದ ಬಿ.ಪಿ.ಎಲ್ ಕುಟುಂಬದ ದುಡಿಯುವ ವ್ಯಕ್ತಿಯ ಕುಟುಂಬಕ್ಕೆ ಪರಿಹಾರ ವಿತರಣೆಗೆ ಕುರಿತಂತೆ ಮಂಡ್ಯ ಜಿಲ್ಲೆಯಲ್ಲಿ ಈವರೆಗೆ ಒಟ್ಟು 399 ಅರ್ಜಿಗಳು ಸ್ವೀಕೃತವಾಗಿದ್ದು, ತಾಲ್ಲೂಕುವಾರು ಮಾಹಿತಿ ಈ ಕೆಳಕಂಡಂತಿದೆ. |
| ಉ | ಈವರೆವಿಗೂ ಸಹಾಯಧನ ನೀಡದೆ ಇರುವ ಪ್ರಕರಣಗಳೆಷ್ಟು: ಯಾವ ಕಾಲಮಿತಿಯೊಳಗೆ ಸದರಿಯವರಿಗೆ ಸಹಾಯಧನ ನೀಡಲಾಗುವುದು? (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | |

| ಕ್ರ.ಸಂ | ತಾಲ್ಲೂಕು | ಸ್ವೀಕೃತವಾಗಿರುವ ಅರ್ಜಿಗಳ ಸಂಖ್ಯೆ |
|---|---|---|
| 1 | ಮಂಡ್ಯ | 118 |
| 2 | ಮದ್ದೂರು | 61 |
| 3 | ಪಾಂಡವಪುರ | 43 |
| 4 | ಶ್ರೀರಂಗಪಟ್ಟಣ | 14 |

| | | |
|---|---|---|
| 5 | ನಾಗಮಂಗಲ | 33 |
| 6 | ಮಳವಳ್ಳಿ | 35 |
| 7 | ಕೆ.ಆರ್. ಪೇಟೆ | 95 |
| | **ಒಟ್ಟು** | **399** |

ಪರಿಹಾರ ಕೋರಿಕೆಗಳ ಅರ್ಜಿಗಳ ಪರಿಶೀಲನಾ ಕಾರ್ಯ ಪ್ರಗತಿಯಲ್ಲಿದ್ದು, ವರದಿ ಆಧಾರದ ಮೇಲೆ ಪರಿಹಾರ ವಿತರಿಸಲಾಗುವುದು.

**ಆಕುಕ 99 ಆಕುಕ ಎಸ್‌ಎಂಎಂ 2021**

**(ಡಾ||ಕೆ.ಸುಧಾಕರ್)**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ**
**ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**

## ಅನುಬಂಧ-1

| ರಾಜ್ಯದಲ್ಲಿ ಒಟ್ಟು ಕೋವಿಡ್-19 ಕಾರಣದಿಂದ ಮರಣ ಹೊಂದಿದವರ ಮಾಹಿತಿ<br>ದಿನಾಂಕ: 01-03-2020 ರಿಂದ 12-09-2021 | | |
|---|---|---|
| **Sl. No** | **Districts** | **Total Covid Deaths in Karnataka** |
| 1 | Bagalakote | 330 |
| 2 | Ballari | 1689 |
| 3 | Belagavi | 899 |
| 4 | Bengaluru Rural | 876 |
| 5 | Bengaluru Urban | 16053 |
| 6 | Bidar | 398 |
| 7 | Chamarajanagara | 497 |
| 8 | Chikkaballapura | 424 |
| 9 | Chikkamagaluru | 390 |
| 10 | Chitradurga | 203 |
| 11 | Dakshina Kannada | 1606 |
| 12 | Davanagere | 599 |
| 13 | Dharwada | 1301 |
| 14 | Gadag | 316 |
| 15 | Hassana | 1235 |
| 16 | Haveri | 640 |
| 17 | Kalaburagi | 819 |
| 18 | Kodagu | 321 |
| 19 | Kolara | 626 |
| 20 | Koppala | 518 |
| 21 | Mandya | 647 |
| 22 | Mysuru | 2375 |
| 23 | Raichuru | 329 |
| 24 | Ramanagara | 314 |
| 25 | Shivamogga | 1078 |
| 26 | Tumakuru | 1101 |
| 27 | Udupi | 466 |
| 28 | Uttara Kannada | 750 |
| 29 | Vijayapura | 494 |
| 30 | Yadagiri | 207 |
| 31 | Others* | 3 |
| | **Total** | **37504** |

[illegible]



# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಕೋವಿಡ್-19 ವೈರಾಣು ಸೋಂಕಿನಿಂದಾಗಿ ದುಡಿಯುವ ಸದಸ್ಯರನ್ನು ಕಳೆದುಕೊಂಡಂತಹ ಬಡತನ ರೇಖೆಗಿಂತ ಕೆಳಗಿರುವ (ಬಿಪಿಎಲ್) ಕುಟುಂಬಕ್ಕೆ ಒಂದು ಲಕ್ಷ ರೂಪಾಯಿ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ:** 1. ಮಾನ್ಯ ಮುಖ್ಯ ಮಂತ್ರಿಯವರ ಘೋಷಣೆ.

2. ರಾಜ್ಯ ಕೋವಿಡ್-19 ತಾಂತ್ರಿಕ ಸಲಹಾ ಸಮಿತಿಯು ಕೋವಿಡ್-19 ನಿಂದಾದ ಮರಣಗಳನ್ನು ದೃಢಪಡಿಸಲು ನೀಡಿರುವ ಮಾನದಂಡಗಳು.

*****

**ಪ್ರಸ್ತಾವನೆ:**

ಕೋವಿಡ್-19 ವೈರಾಣು ಸೋಂಕು ವಿಶ್ವದಾದ್ಯಂತ ಪಸರಿಸಿ, ಭಾರತ ದೇಶ ಹಾಗೂ ಕರ್ನಾಟಕ ರಾಜ್ಯದಲ್ಲೂ ಸಹ ಹರಡಿರುತ್ತದೆ. ರಾಜ್ಯದಲ್ಲಿ ಕೋವಿಡ್-19 ಸೋಂಕಿಗೆ ಒಳಗಾಗಿರುವ ವ್ಯಕ್ತಿಗಳಿಗೆ ತ್ವರಿತ ಮತ್ತು ಗುಣಮಟ್ಟದ ಆರೈಕೆ ಒದಗಿಸಲು ರಾಜ್ಯ ಸರ್ಕಾರವು ಆರೋಗ್ಯ ಮೂಲ ಸೌಕರ್ಯಗಳನ್ನು ಹೆಚ್ಚಿಸಲು ನಿರಂತರ ಪ್ರಯತ್ನ ಮಾಡಿರುತ್ತದೆ. ಕೋವಿಡ್-19 ನಿಯಂತ್ರಣಕ್ಕಾಗಿ ವಿಧಿಸಲಾದ ಕಟ್ಟುನಿಟ್ಟಿನ ಮಾರ್ಗಸೂಚಿಗಳ ಜಾರಿಯಿಂದಾಗಿ ಉಂಟಾದ ಆರ್ಥಿಕ ಸಂಕಷ್ಟಗಳನ್ನು ನಿವಾರಿಸಲು ದುರ್ಬಲ ವರ್ಗದ ಗುಂಪುಗಳಿಗೆ ವಿವಿಧ ಆರ್ಥಿಕ ಪರಿಹಾರ ಪ್ಯಾಕೇಜು/ಯೋಜನೆಗಳನ್ನು ಜಾರಿಗೆ ತರಲಾಗಿದೆ. ಕೋವಿಡ್-19 ವೈರಾಣು ಸೋಂಕಿನ ಪರಿಣಾಮವಾಗಿ ರಾಜ್ಯಾದ್ಯಂತ ಈವರೆಗೆ ಸಾವಿರಾರು ಕುಟುಂಬಗಳಲ್ಲಿ ಹಲವು ಸಾವು ನೋವುಗಳು ಸಂಭವಿಸಿರುತ್ತದೆ.

ರಾಜ್ಯಸರ್ಕಾರವು ನಿರಂತರವಾಗಿ ಕಟ್ಟುನಿಟ್ಟಿನ ನಿಯಂತ್ರಣ ಕ್ರಮಗಳನ್ನು ಅನುಸರಿಸಿದ್ದರೂ ಸಹ 2020ರ ಮಾರ್ಚ್ ಮಾಹೆಯಿಂದ ಈವರೆಗೆ ರಾಜ್ಯದಲ್ಲಿ ಉಂಟಾದ ಕೋವಿಡ್-19ನ ಮೊದಲನೇ ಮತ್ತು ಎರಡನೇ ಅಲೆಯ ಸಂದರ್ಭದಲ್ಲಿ ಹಲವಾರು ವ್ಯಕ್ತಿಗಳು ಕೊರೋನ ವೈರಾಣು ಸೋಂಕಿಗೆ ತುತ್ತಾಗಿ ಮೃತಪಟ್ಟಿರುತ್ತಾರೆ. ಈ ಸಾಂಕ್ರಾಮಿಕದಿಂದಾಗಿ ಬಡತನ ರೇಖೆಗಿಂತ ಕೆಳಗಿರುವ ಹಲವು ಕುಟುಂಬಗಳು ದುಡಿಯುವ ಸದಸ್ಯರನ್ನು ಕಳೆದುಕೊಂಡಿವೆ ಎಂಬ ಅಂಶವನ್ನು ಅರಿತುಕೊಂಡು ಮಾನ್ಯ ಮುಖ್ಯ ಮಂತ್ರಿಯವರು ದುಡಿಯುವ ಸದಸ್ಯರನ್ನು ಕಳೆದುಕೊಂಡಂತಹ ಬಡತನ ರೇಖೆಗಿಂತ ಕೆಳಗಿರುವ ಪ್ರತಿಯೊಂದು ಕುಟುಂಬಕ್ಕೆ ರೂ.1.00 ಲಕ್ಷಗಳ ಆರ್ಥಿಕ ನೆರವನ್ನು ನೀಡುವುದಾಗಿ ಘೋಷಿಸಿರುತ್ತಾರೆ.

ರಾಜ್ಯ ಕೋವಿಡ್-19 ತಾಂತ್ರಿಕ ಸಲಹಾ ಸಮಿತಿಯು ಕೋವಿಡ್-19 ನಿಂದಾದ ಮರಣಗಳನ್ನು ದೃಢಪಡಿಸಲು ಈ ಕೆಳಕಂಡ ಮಾನದಂಡಗಳನ್ನು ನಿಗದಿಪಡಿಸಿರುತ್ತದೆ.

Criteria to declare death and certify death due to COVID-19

a. **Declaration:** The death of a person who was diagnosed COVID-19 by RT-PCR/RAT/Trunat/CB-NAAT or any other diagnostic test that is approved by the ICMR and treated in home isolation/COVID Care Centre (CCC)/hospital (Govt. or Private); or diagnosed and treated as COVID-19 like syndrome in a hospital (Govt. or private) shall be considered to have died of COVID-19.

**b. Documents required:**

i. COVID 19 positive report from recognized laboratory, should have uploaded in S3 portal, shall have P number and Certified by a qualified Medical Practitioner.

..2

ii. If treated symptomatically (any suspected case who is RT-PCR negative, but clinico-radiological evidence & other laboratory values are suggestive of COVID 19 cases), shall have P Number & Certified by a qualified Medical Practitioner.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಶವಾಗಿ ಪರಿಶೀಲಿಸಿ, ಕೋವಿಡ್-19 ಸಾಂಕ್ರಾಮಿಕ ಸೋಂಕಿನಿಂದಾಗಿ ದುಡಿಯುವ ಸದಸ್ಯರನ್ನು ಕಳೆದುಕೊಂಡ ಬಡತನ ರೇಖೆಗಿಂತ ಕೆಳಗಿರುವ ಪ್ರತಿಯೊಂದು ಕುಟುಂಬಕ್ಕೆ ರೂ.1.00 ಲಕ್ಷಗಳ ಆರ್ಥಿಕ ನೆರವನ್ನು ನೀಡಲು ರಾಜ್ಯ ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿರುತ್ತದೆ.

**<u>ಸರ್ಕಾರದ ಆದೇಶ ಸಂಖ್ಯೆ: ಕಂಇ 294 ಟಿಎನ್‌ಆರ್ 2021;</u>**
**<u>ಬೆಂಗಳೂರು, ದಿನಾಂಕ:08ನೇ ಜುಲೈ 2021</u>**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕೋವಿಡ್-19 ವೈರಾಣು ಸೋಂಕಿನಿಂದಾಗಿ ದುಡಿಯುವ ಸದಸ್ಯರನ್ನು ಕಳೆದುಕೊಂಡಂತಹ ಬಡತನ ರೇಖೆಗಿಂತ ಕೆಳಗಿರುವ (ಬಿಪಿಎಲ್) ಕುಟುಂಬಕ್ಕೆ **ರೂ.1.00 ಲಕ್ಷ (ಒಂದು ಲಕ್ಷ ರೂಪಾಯಿಗಳು ಮಾತ್ರ)** ಆರ್ಥಿಕ ನೆರವನ್ನು ನೀಡಲು ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿ ಆದೇಶಿಸಿದೆ:

ಸದರಿ ಉದ್ದೇಶಕ್ಕೆ ಅಗತ್ಯವಾದ ಅನುದಾನವನ್ನು 2021-22ನೇ ಸಾಲಿನ ಆಯವ್ಯಯದ **"ನೂತನ ಸಾಮಾಜಿಕ ಭದ್ರತೆ (ಸಂಧ್ಯಾ ಸುರಕ್ಷ) ಲೆಕ್ಕ ಶೀರ್ಷಿಕೆ:2235-60-001-0-02-116 (ಸಾಮಾಜಿಕ ಭದ್ರತ ಪಿಂಚಣಿ)"** ರಡಿ ಭರಿಸತಕ್ಕದ್ದು.

**<u>ಷರತ್ತುಗಳು:</u>**

1. ಬಡತನ ರೇಖೆಗಿಂತ ಕೆಳಗಿರುವ ಕುಟುಂಬದಲ್ಲಿ ಒಂದಕ್ಕಿಂತ ಹೆಚ್ಚು ಸದಸ್ಯರು ಕೋವಿಡ್-19 ಸಾಂಕ್ರಾಮಿಕ ಸೋಂಕಿನಿಂದ ಮರಣ ಹೊಂದಿದ್ದರೂ ಸಹ ಒಬ್ಬ ಸದಸ್ಯರಿಗೆ ಮಾತ್ರ ರೂ.1.00 ಲಕ್ಷಗಳ ಪರಿಹಾರ ಪಾವತಿಸತಕ್ಕದ್ದು.
2. ರಾಜ್ಯ ಕೋವಿಡ್-19 ತಾಂತ್ರಿಕ ಸಲಹಾ ಸಮಿತಿಯು ಕೋವಿಡ್-19 ನಿಂದಾದ ಮರಣಗಳನ್ನು ದೃಢಪಡಿಸಲು ನೀಡಿರುವ ಮಾನದಂಡಗಳ ಆಧಾರದ ಮೇಲೆ ದೃಢಪಡಿಸಿರುವಂತಹ ಸಾವಿನ ಪ್ರಕರಣಗಳಿಗೆ ಮಾತ್ರ ಪರಿಹಾರ ಮೊತ್ತವನ್ನು ಪಾವತಿಸತಕ್ಕದ್ದು.
3. ಜಿಲ್ಲಾಧಿಕಾರಿಗಳು ಕೋವಿಡ್-19 ವೈರಾಣು ಸೋಂಕಿನಿಂದ ಮೃತಪಟ್ಟಂತಹ ವ್ಯಕ್ತಿಗಳ ಸಂಪೂರ್ಣ ವಿವರಗಳನ್ನು ಜಿಲ್ಲಾ ವೈದ್ಯಾಧಿಕಾರಿಗಳಿಂದ ಪಡೆಯತಕ್ಕದ್ದು.
4. ಜಿಲ್ಲಾ ವೈದ್ಯಾಧಿಕಾರಿಗಳು ಕೋವಿಡ್‌ನಿಂದ ಮೃತಪಟ್ಟ ವ್ಯಕ್ತಿಗಳ ವಿವರ ನೀಡುವ ಮೊದಲು ಕೋವಿಡ್-19 ತಾಂತ್ರಿಕ ಸಲಹಾ ಸಮಿತಿಯು ನಿಗದಿಪಡಿಸಿದ ಮಾನದಂಡಗಳನ್ನು/ದಾಖಲೆಗಳನ್ನು ಪರಿಶೀಲಿಸಿ ಖಚಿತಪಡಿಸಿಕೊಳ್ಳುವುದು.
5. ಜಿಲ್ಲಾ ವೈದ್ಯಾಧಿಕಾರಿಗಳು ನೀಡಿರುವ ಮೃತ ವ್ಯಕ್ತಿಗಳ ಮಾಹಿತಿಯ ಆಧಾರದ ಮೇಲೆ ಮೃತರ ಕಾನೂನು ಬದ್ಧ ವಾರಸುದಾರರನ್ನು/ಕುಟುಂಬದ ಸದಸ್ಯರನ್ನು ನಿಯಮಾನುಸಾರ ಗುರುತಿಸಿ, ದೃಢಪಡಿಸಿಕೊಂಡನಂತರವಷ್ಟೇ ಮೃತರ ಕಾನೂನು ಸಮ್ಮತ ವಾರಸುದಾರರಿಂದ ಅಧಿಕೃತ ಗುರುತು ಪತ್ರ ಮತ್ತು ಬ್ಯಾಂಕ್ ವಿವರಗಳನ್ನು ಜಿಲ್ಲಾಧಿಕಾರಿಗಳು ಪಡೆದು, ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು.

....3

6. ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದಿಂದ ರೂ.1.00 ಲಕ್ಷಗಳನ್ನು RTGS/NEFT ಮೂಲಕ ನೇರವಾಗಿ ಕೋವಿಡ್-19 ಸೋಂಕಿನಿಂದ ಮೃತಪಟ್ಟ ಬಿಪಿಎಲ್ ಕುಟುಂಬದ ವ್ಯಕ್ತಿಯ ವಾರಸುದಾರರ ಬ್ಯಾಂಕ್ ಖಾತೆಗೆ ಜಮಾ ಮಾಡತಕ್ಕದ್ದು.

7. ಈ ಸಂಬಂಧ ಕಾಲಕಾಲಕ್ಕೆ ಸರ್ಕಾರದಿಂದ ಮತ್ತು ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದಿಂದ ಹೊರಡಿಸುವ ಆದೇಶ/ಸುತ್ತೋಲೆಯಲ್ಲಿನ ಸೂಚನೆಗಳನ್ನು ಜಿಲ್ಲಾಧಿಕಾರಿಗಳು ಕಡ್ಡಾಯವಾಗಿ ಪಾಲಿಸತಕ್ಕದ್ದು.

8. ಜಿಲ್ಲಾ ಹಂತದಲ್ಲಿ ಜಿಲ್ಲಾಧಿಕಾರಿಗಳು ಮತ್ತು ರಾಜ್ಯ ಮಟ್ಟದಲ್ಲಿ ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಬೆಂಗಳೂರು ಇವರು ಪ್ರತಿವಾರ ಯೋಜನೆಯ ಪ್ರಗತಿಯನ್ನು ಪರಿಶೀಲಿಸತಕ್ಕದ್ದು.

9. ಪರಿಹಾರ ಪಾವತಿಯಲ್ಲಿ ವಿಳಂಬ ಧೋರಣೆ ಅನುಸರಿಸುವುದು ಮತ್ತು ಕಾನೂನು ಬದ್ಧವಾಗಿ ಅಧಿಕೃತವಲ್ಲದ ವಾರಸುದಾರರಿಗೆ ಪರಿಹಾರ ಮೊತ್ತ ವಿತರಿಸುವುದು ಮೊದಲಾದಂತಹ ಲೋಪಗಳು ಕಂಡುಬಂದಲ್ಲಿ ಸಂಬಂಧಪಟ್ಟ ಅಧಿಕಾರಿಗಳನ್ನು ನೇರ ಹೊಣೆಗಾರರನ್ನಾಗಿ ಮಾಡಲಾಗುವುದು.

10. ಕೋವಿಡ್-19 ಸೋಂಕಿನಿಂದ ಮೃತಪಟ್ಟ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ವ್ಯಕ್ತಿಗಳ ವಾರಸುದಾರರಿಗೆ ಪರಿಹಾರ ಪಾವತಿಸುವಂತಹ ಎಲ್ಲಾ ಪ್ರಕ್ರಿಯೆಗಳನ್ನು ಅಂತರ್ಜಾಲದ (Website/Portal/App) ಮೂಲಕವೇ ನಿರ್ವಹಿಸತಕ್ಕದ್ದು.

11. ಈ ಉದ್ದೇಶಕ್ಕಾಗಿ, ಈಗಾಗಲೇ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ) ದಲ್ಲಿ ಪ್ರಸ್ತುತ ಚಾಲನೆಯಲ್ಲಿರುವ ತಂತ್ರಾಂಶಗಳ (Applications) ನೆರವನ್ನು ಪಡೆಯತಕ್ಕದ್ದು.

12. ಕೋವಿಡ್-19 ಸೋಂಕಿನಿಂದ ಮೃತಪಟ್ಟ ಬಿಪಿಎಲ್ ಕುಟುಂಬದ ವ್ಯಕ್ತಿಗಳ ಅಧಿಕೃತ ವಾರಸುದಾರರಿಗೆ ಪರಿಹಾರ ಮೊತ್ತವನ್ನು ಪಾವತಿಸಿರುವ ವಿವರಗಳ ವರದಿಯನ್ನು ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಇಲಾಖೆ, ಬೆಂಗಳೂರು ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಗೆ ಸಲ್ಲಿಸತಕ್ಕದ್ದು.

13. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಯೋಜನಾ ಇಲಾಖೆ ಹಾಗೂ ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದ ಅಂತರ್ಜಾಲ ತಾಣದಲ್ಲಿ ಕೋವಿಡ್-19 ಸೋಂಕಿನಿಂದ ಮೃತಪಟ್ಟ ಬಿಪಿಎಲ್ ಕುಟುಂಬದ ವ್ಯಕ್ತಿಗಳಿಗೆ ಪರಿಹಾರ ಪಾವತಿಸಿರುವ ಮಾಹಿತಿಯನ್ನೊಳಗೊಂಡ ಫಲಕವನ್ನು (Dash-Board) ಪ್ರಕಟಿಸತಕ್ಕದ್ದು ಮತ್ತು ಪ್ರತಿದಿನ ಇಂದೀಕರಿಸತಕ್ಕದ್ದು.

...4

ಸದರಿ ಯೋಜನೆಯ ಅನುಷ್ಠಾನಕ್ಕೆ ಹೆಚ್ಚುವರಿ ಅನುದಾನದ ಅಗತ್ಯತೆ ಇದ್ದಲ್ಲಿ, ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಬೆಂಗಳೂರು ಇವರು ಸೂಕ್ತ ಸಮರ್ಥನೆಗಳೊಂದಿಗೆ ಸಮುಚಿತ ಮಾರ್ಗದ ಮೂಲಕ ಆರ್ಥಿಕ ಇಲಾಖೆಗೆ 2021-22ನೇ ಆರ್ಥಿಕ ವರ್ಷದ ಅಂತ್ಯದೊಳಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 161 ವೆಚ್ಚ-7/2021, ದಿನಾಂಕ:06.07.2021ರಲ್ಲಿ ನೀಡಿರುವ ಸಹಮತದನುಸಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಎನ್.ಮಂಜುನಾಥ ಪ್ರಸಾದ್, ಭಾ.ಆ.ಸೇ) 8/7/2021
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಕಂದಾಯ ಇಲಾಖೆ

ಗೆ:

1. ಪ್ರಧಾನ ಮಹಾಲೇಖಪಾಲರು (A&E), ಕರ್ನಾಟಕ, ಪಿ.ಬಿ.ನಂ. 5329/5369 ಪಾರ್ಕ್ ಹೌಸ್ ರಸ್ತೆ, ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (E&RSA), ಕರ್ನಾಟಕ, ಪಿ.ಬಿ.ನಂ.5398, ನ್ಯೂ ಬಿಲ್ಡಿಂಗ್ 'ಆಡಿಟ್ ಭವನ' ಬೆಂಗಳೂರು.
3. ಪ್ರಧಾನ ಮಹಾಲೇಖಪಾಲರು (G&SSA), ಕರ್ನಾಟಕ, ಪಿ.ಬಿ.ನಂ.5398, ನ್ಯೂ ಬಿಲ್ಡಿಂಗ್ 'ಆಡಿಟ್ ಭವನ' ಬೆಂಗಳೂರು.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
5. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸಸೌಧ, ಬೆಂಗಳೂರು.
6. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿ ಕಟ್ಟಡ ಬೆಂಗಳೂರು.
7. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು.
8. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು.
9. ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಭವನ ಬೆಂಗಳೂರು
10. ಎಲ್ಲಾ ಜಿಲ್ಲೆಗಳ ಜಿಲ್ಲಾ ವೈದ್ಯಾಧಿಕಾರಿಗಳು.
11. ಎಲ್ಲಾ ಜಿಲ್ಲೆಗಳ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
12. ಸರ್ಕಾರದ ಉಪ ಕಾರ್ಯದರ್ಶಿಗಳು, ಕಂದಾಯ ಇಲಾಖೆ, (ಸೇವೆಗಳು-3, ಭೂಸುಧಾರಣಾ ಕೋಶ, ಕೆ.ಎ.ಟಿ, ಬಾಡಿಗೆ ನಿಯಂತ್ರಣ ಹಾಗೂ ಸಾಮಾಜಿಕ ಭದ್ರತೆ & ಪಿಂಚಣಿಗಳು) ಬಹುಮಹಡಿ ಕಟ್ಟಡ, ಬೆಂಗಳೂರು.
13. ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ನೃಪತುಂಗ ರಸ್ತೆ, ಬೆಂಗಳೂರು.
14. ಜಂಟಿ ನಿರ್ದೇಶಕರು, ಟಿಎನ್‌ಎಂಸಿ, ಖನಿಜ ಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು.
15. ಉಪ ನಿರ್ದೇಶಕರು, ಖಜಾನೆ ನೆಟ್ ವರ್ಕ್ ಮ್ಯಾನೇಜ್ಮೆಂಟ್ ಸೆಂಟರ್, ಖನಿಜ ಭವನ, ಬೆಂಗಳೂರು.
16. ಎಲ್ಲಾ ಜಿಲ್ಲೆಗಳ ಜಿಲ್ಲಾ ಖಜಾನಾಧಿಕಾರಿಗಳು.

...5

ಪ್ರತಿ:

1. ಮಾನ್ಯ ಮುಖ್ಯ ಮಂತ್ರಿಗಳ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
3. ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ (ವಿ.ನಿ) ಇವರ ಆಪ್ತ ಕಾರ್ಯದರ್ಶಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
5. ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ) ಇವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
6. ಆಯುಕ್ತರು, ಕರ್ನಾಟಕ ರಾಜ್ಯ ವಿಪತ್ತು ನಿರ್ವಹಣಾ ಪ್ರಾಧಿಕಾರ ಇವರ ಆಪ್ತ ಸಹಾಯಕರು ಬೆಂಗಳೂರು.
7. ಸರ್ಕಾರದ ಉಪ ಕಾರ್ಯದರ್ಶಿಗಳು, ಕಂದಾಯ ಇಲಾಖೆ (ವಿ.ನಿ ಮತ್ತು ನೋಂ & ಮು) ಇವರ ಆಪ್ತ ಸಹಾಯಕರು, ಬಹುಮಹಡಿಗಳ ಕಟ್ಟಡ, ಬೆಂಗಳೂರು.
8. ಕಂದಾಯ ಇಲಾಖೆ (ವಿ.ನಿ) ಲೆಕ್ಕ ಪತ್ರ ಶಾಖೆ.
9. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

ಅನುಬಂಧ - 2

| TALUK WISE DEATHS DETAIL 05-09-2021 | | |
|---|---|---|
| Sl | Taluk | Total Deaths |
| 1 | Mandya | 189 |
| 2 | Maddur | 82 |
| 3 | Malavalli | 82 |
| 4 | Pandavapura | 43 |
| 5 | SRP | 50 |
| 6 | KRP | 95 |
| 7 | Nagamangla | 72 |
| 8 | Others | 33 |
| TOTAL | | 646 |

I/C DEPUTY DIRECTOR
CRITICAL CARE SUPPORT UNIT
AROGYA SOUDHA
BENGALURU